ಶ್ರೀರಾಮಸಹಾಯಂ

## ಸುಬೋಧ ಕುಸುಮಾಂಜಲಿ ಗ್ರಂಥಮಾಲಾ.

ಮುನ್ನುಡಿ :—

ಗ್ರಂಥಮಾಲೆಯು ಕಳೆದ ಎಂಟೊಂಬತ್ತು ವರ್ಷಗಳಿಂದಲೂ, ಕರ್ಣಾಟಕ ಬಾಲಕ-ಬಾಲಿಕೆಯರಿಗೆ, ಪ್ರಾತಸ್ಮರಣೀಯರೂ ಯಶಃಕಾಯರೂ ಆದ ಪೂರ್ವಿಕಾಧುನಿಕ ಭಾರತೀಯ ಮಹನೀಯರ ಪವಿತ್ರ ಜೀವನ ಚರಿತ್ರೆಗಳನ್ನು ಸುಲಭವಾದ ತಿಳಿಗನ್ನಡ ಮಾತುಗಳಲ್ಲಿ ಒದಗಿಸಿ, ತದ್ವಾರಾ ಅವರಿಗೆ ನೀತಿಬೋಧಕವಾದ ಗ್ರಂಥಭಾಂಡಾರವೊಂದನ್ನು ಏರ್ಪಡಿಸಲು ಹೆಣಗುತ್ತಿರುವುದು ಭಾಷಾಭಿಮಾನಿಗಳಾದ ವಾಚಕರಿಗೆ ವಿದಿತವಿರಬಹುದು. ಗ್ರಂಥಮಾಲೆಯಲ್ಲಿ ಈಗಾಗಲೇ ಇಪ್ಪತ್ತೈದು ಮೂವತ್ತು ಮಂದಿ ಪುರುಷಪುಂಗವರ ಜೀವಿತಗಳೂ, ಏಳೆಂಟುಮಂದಿ ಸ್ತ್ರೀ ಶಿರೋಮಣಿಯರ ಜೀವಿತಗಳೂ ವಚನ ರೂಪದಲ್ಲಿ ಪ್ರಕಟವಾಗಿವೆ. ಆದರೆ ಕಥಾ ಭಾಗವನ್ನು ಗದ್ಯರೂಪದಲ್ಲಿ ಓದಿ ಅದರಿಂದ ಬೋಧವಾಗುವ ನೀತಿಯನ್ನು ಗದ್ಯರೂಪದಲ್ಲೇ ನೆನಪಿನಲ್ಲಿಟ್ಟುಕೊಳ್ಳುವುದಕ್ಕಿಂತಲೂ, ಪದ್ಯರೂಪದಲ್ಲಿದ್ದರೆ ಜ್ಞಾಪಕದಲ್ಲಿಟ್ಟುಕೊಳ್ಳಲು ಹೆಚ್ಚು ಸಹಾಯಕವಾಗುವುದಲ್ಲವೆ? ಆದುದರಿಂದ ಸದ್ಯಃ ನಮ್ಮ ಸ್ಥಿತಿಯಲ್ಲಿ ಕರ್ಣಾಟಕ ಮಹಿಳೆಯರ ಪುರೋಭಿವೃದ್ಧಿಗೆ ಅತ್ಯಾವಶ್ಯಕಗಳಾದ ಪೂರ್ವಿಕರ ಆಚರಣೆಗಳನ್ನು ಒಳಕೊಂಡು, ಸುಲಭವಾದ ತಿಳಿಗನ್ನಡ ಮಾತುಗಳಲ್ಲಿ ಪದ್ಯರೂಪವಾಗಿ ರಚಿಸಲ್ಪಟ್ಟಿರುವ "**ಮಹಿಳಾಸುನೀತಿಶತಕ**" ವೆಂಬ ಈ ಚಿಕ್ಕ ಗ್ರಂಥವನ್ನು ಕರ್ಣಾಟಕ ಮಾತೃ ಮತ್ತು ಭಗಿನೀ ಸಮೂಹದ ಸನ್ನಿಧಿಯಲ್ಲಿ ಸಮರ್ಪಿಸಲು ಆಶಿಸುತ್ತೇವೆ. ಇದು ಆ ಪುಸ್ತಕದ ತಿದ್ದಿದ ದ್ವಿತೀಯ ಮುದ್ರಣವು. ಕರ್ಣಾಟಕ ಭಾಷಾಭಿಮಾನಿ

ಗಳೂ, ದೇಶಾಭಿಮಾನಿಗಳೂ, ವಿದ್ಯಾಲಯಾದಿ ಸಂಸ್ಥೆಗಳಲ್ಲಿ ಇದಕ್ಕೆ ತಕ್ಕ ಸ್ಥಾನವನ್ನು ಕೊಡುವುದರ ಮೂಲಕ, ಈ ಗ್ರಂಥವು ಯಾವ ಉದ್ದೇಶದಿಂದ ರಚಿಸಲ್ಪಟ್ಟಿತೋ ಆ ಉದ್ದೇಶವನ್ನು ಸಾರ್ಥಕಗೊಳಿಸಿ, ತನ್ಮೂಲಕ ಗ್ರಂಥಮಾಲೆಯನ್ನು ಪ್ರೋತ್ಸಾಹಪಡಿಸಬೇಕಾಗಿ ಕೋರುತ್ತೇವೆ.

ಈ ಸಂದರ್ಭದಲ್ಲಿ ಹೇಳಬೇಕಾದ ಮಾತೊಂದುಂಟು. ಇಂಗ್ಲಿಷ್ ವಿದ್ಯಾಭ್ಯಾಸವು ನಮ್ಮವರಲ್ಲಿ ವ್ಯಾಪಿಸಿದಂತೆಲ್ಲಾ ಪಾಶ್ಚಾತ್ಯ ನಾಗರಿತೆಯು ದಿನದಿನಕ್ಕೆ ಹೆಚ್ಚು ಪ್ರಮಾಣದಿಂದ ಹರಡುತ್ತಿದೆಯಷ್ಟೆ! ಹಾಗೆ ಆ ಭಾಷಾಭ್ಯಾಸಿಗಳಲ್ಲಿ ವಿಚಾರಶೀಲರಾದ ಕೆಲವುಂದಿ ಮಹನೀಯರ ವಿನಾ, ಮಿಕ್ಕ ಅನೇಕರು ಆ ಪರದೇಶೀಯರ ಕೇವಲ ವೇಷ-ಭಾಷಾ-ಭೂಷಣಾದಿಗಳಿಗೆ ಮಾತ್ರ ಮರುಳಾಗಿ ಅವರನ್ನು ಅನುಸರಿಸತೊಡಗಿದರು. ನಮ್ಮ ದೇಶದ—ಆರ್ಯರ ಪೂರ್ವಿಕಾಚರಣೆಗಳೇ ಅವರಿಗೆ ಅಸಹ್ಯವಾಗಿ ತೋರಸಾಗಿದವು. ಆವುಗಳನ್ನು ಅನುಸರಿಸುವುದೂ ಮೌಢ್ಯತೆಯ ಫಲವೆಂದು ಅಲ್ಲಲ್ಲಿ ಗೊಣಗಿಕೊಳ್ಳಲಾರಂಭವಾಯಿತು. ಈ ನವೀನ ನಾಗರಿಕತೆಯು ಅಷ್ಟು ಮಾತ್ರಕ್ಕೇ ನಿಲ್ಲಲಿಲ್ಲ! ನಮ್ಮ ಮನೆಗಳನ್ನೂ ಪ್ರವೇಶಿಸಿತು. ಕೆಲಕೆಲವು ಸ್ಥಳಗಳಲ್ಲಿ ನಮ್ಮ ಸ್ತ್ರೀಯರೂ ಆ ಪಾಶ್ಚಾತ್ಯ ಸ್ತ್ರೀಯರನ್ನು ನೋಡಿ ತಮ್ಮ ವೇಷ-ಭೂಷಣಗಳನ್ನು ಬದಲಾಯಿಸಿಕೊಳ್ಳತೊಡಗಿದರು. ಈಚೀಚೆಗಂತೂ "ಬೈಸಿಕಲ್" ಮುಂತಾದ ವಾಹನವಿಶೇಷಗಳಲ್ಲಿ ಕೂಡ ಪುರುಷರಂತೆ ತಿರುಗಾಡುವಿಕೆಯೂ ಪ್ರಾರಂಭವಾಗಿದೆ. ಆಯಾ ದೇಶದಲ್ಲಿ ಪೂರ್ವಕಾಲದಿಂದ ನಡೆದುಬಂದ ಆಚರಣೆಗಳು, ಆಯಾ ದೇಶದ ಸ್ಥಿತಿಗತಿಗಳು, ವಾಯುಗುಣ, ಪ್ರಕೃತಿಸಂಬಂಧವಾದ ಅನುಕೂಲ್ಯಗಳು ಮುಂತಾದುವುಗಳನ್ನು ಅನುಸರಿಸಿ ಸ್ವಾಭಾವಿಕವಾಗಿ ಉಂಟಾದುವುಗಳಲ್ಲವೆ? ಉಷ್ಣವಲಯದಲ್ಲಿ ವಾಸಿಸುತ್ತಿರುವ ನಾವು ಡಾಂಭಿಕಕ್ಕಲ್ಲದಿದ್ದರೆ, ಆಹಾರಪಾನೀಯ ವಸ್ತ್ರವಿಹಾರಾದಿಗಳಲ್ಲಿ ಶೀತವಲಯದವರನ್ನು ಅನುಸರಿಸಿ ನಡೆಯಬೇ

ಕಾದ ಕಾರಣವೇನಿದೆ? ನಮ್ಮ ದೇಶದ ಪೂರ್ವಿಕ ಆಚರಣೆಗಳಲ್ಲಿ ಒಂದೊಂದೂ ಆರೋಗ್ಯವಿಧಿ, ದೇಶದ ಸ್ಥಿತಿಗತಿಗಳು, ಹವೆ ವಾಯುಗುಣಗಳು ಮುಂತಾದುವುಗಳನ್ನು ಅನುಸರಿಸಿ ಏರ್ಪಟ್ಟಿರುವುವಲ್ಲದೆ, ಮೌಢ್ಯತೆಯ ಫಲವಾಗಿ ಏರ್ಪಟ್ಟವುಗಳಲ್ಲ! ಅಥವಾ ಅರ್ಥವಿಲ್ಲದೆ ಏನೋ ಮನಬಂದಂತೆ ಇರುವುದಕ್ಕಾಗಿಯೂ ಉಂಟಾದುವುಗಳಲ್ಲ. ಪ್ರತಿಯೊಂದಕ್ಕೂ ಅರ್ಥವುಂಟು. ಪ್ರತಿಯೊಂದಕ್ಕೂ ಉದ್ದೇಶವುಂಟು. ನಾವು ಮಾತ್ರ ಅವುಗಳ ಅಂತರ್ಯ ರಹಸ್ಯಗಳನ್ನು ಕುರಿತು ಶ್ರದ್ಧಾಪೂರ್ವಕವಾಗಿ ವಿಚಾರಮಾಡತೊಡಗಬೇಕು. ಆಗ ಅವುಗಳ ಘನವಾದ ಉದ್ದೇಶಗಳು ನಿಶ್ಚಯವಾಗಿಯೂ ಗೋಚರಿಸದಿರಲಾರವು.

ಹಾಗೆಯೇ ಸ್ತ್ರೀಯರ ವಿಷಯವೂ! ಮನೆಗೆ ಸಂಬಂಧಪಟ್ಟ ಪ್ರತಿಯೊಂದು ಕಾರ್ಯವನ್ನೂ ಮನೆಯ ಯಜಮಾನಿಯು—ಗೃಹಿಣಿಯು ಶ್ರದ್ಧೆ ವಹಿಸಿ ಮಾಡಿಕೊಳ್ಳುತ್ತಿದ್ದುದು ಪೂರ್ವಾಚಾರ. ಇದರಿಂದ "ಸ್ತ್ರೀಯು ಪರಿಚಾರಿಣಿಯಾಗಿಯೂ, ಪುರುಷನು ಪ್ರಭುವಾಗಿಯೂ ಇರುವನು. ಪುರುಷನಿಗೆ ಸರ್ವ ಸ್ವಾತಂತ್ರ್ಯವೂ ಇರುವಾಗ ಸ್ತ್ರೀಯು ದಾಸಿಯಂತೆ ಮನೆಯಲ್ಲಿ ದುಡಿಯುತ್ತಿರುವಳು" ಎಂದು ಭಾವಿಸಲಾಗದು. ಮೊದಲು ಮನೆಯೆಂಬುದು ಯಾರದು? ಗಂಡನದೋ ಹೆಂಡತಿಯದೋ? ಎರಡು ಕಣ್ಣುಗಳೂ ಐಕ್ಯಭಾವದಿಂದ ಒಂದು ವಸ್ತುವನ್ನು ನೋಡುವಂತೆಯೇ, ಇವರಿಬ್ಬರೂ ತಾನು ಮೇಲು ತಾನು ಕೀಳು ಎಂಬ ಭಾವನೆಗೆ ಮನಸ್ಸಿನಲ್ಲಿ ಸ್ಥಳ ಕೊಡದೆ ಐಕ್ಯಭಾವದಿಂದ ಗೃಹಕಾರ್ಯವನ್ನು ಸಾಗಿಸಿಕೊಳ್ಳಬೇಕಲ್ಲವೆ? ತನ್ನ ಮನೆಯಲ್ಲಿ, ಮನೆಯ ಒಟ್ಟು ಸುಖಸಂತೋಷಗಳಿಗಾಗಿ ಮಾಡುವ ಕಾರ್ಯವನ್ನು ದಾಸ್ಯವೆಂದು ಸ್ತ್ರೀಯು ಭಾವಿಸುವುದಾದರೆ, ಪುರುಷನೂ ಸಂಸಾರಕ್ಕಾಗಿ ದುಡಿದು ಹಾಕಬೇಕಾದ ತನ್ನ ವೃತ್ತಿಯನ್ನು ಗಾಣದ ಎತ್ತಿನಂತೆ ಕೇವಲ ಶ್ರಮದಾಯಕವಾದ ಕಾರ್ಯವೆಂದು ಮಾತ್ರ ಯೋಚಿಸಬೇಕಾಗು

ವುದಷ್ಟೆ? ಹಾಗಲ್ಲ, ಗೃಹ, ಗೃಹಸ್ಥ, ಗೃಹಿಣಿ ಇವುಗಳು ಕೇವಲ ಹುಟ್ಟಿದ ತಪ್ಪಿಗಾಗಿ ಹೇಗೋ ಜೀವಮಾನವನ್ನು ಸಾಗಿಸಿಕೊಂಡು ಒಂದುದಿನ ಕಣ್ಣುಮುಚ್ಚಿಕೊಳ್ಳುವುದಕ್ಕಾಗಿ ಏರ್ಪಟ್ಟುವಲ್ಲ! ನಮ್ಮ ದೇಶದ ದೃಷ್ಟಿಯಲ್ಲಿ ದಿನದ ಒಂದೊಂದು ಕೃತಿಯೂ ನಮ್ಮ ಜೀವನಯಾತ್ರೆಯಲ್ಲಿನ ಆತ್ಮಾಭಿವೃದ್ಧಿಯ ಮಾರ್ಗದಲ್ಲಿ ಒಂದೊಂದು ಅಡಿಯನ್ನಿಡುತ್ತಾ ಜನ್ಮಸಾರ್ಥಕ್ಯದ ಕಡೆಗೆ ನಡೆಯಲು ಅನುಕೂಲವಾಗಿ ಏರ್ಪಟ್ಟುದಾಗಿದೆ. ನಮ್ಮ ಪೂರ್ವಿಕ ಸ್ತ್ರೀಯರಲ್ಲಿ ಕೆಲವರು ಮನೆಯ ಯಾವ ಕೆಲಸವನ್ನು ಮಾಡಿದರೂ "ರಾಮಾ ನಿನ್ನ ಸೇವೆ, ಶಂಕರಾ ನಿನ್ನ ಸೇವೆ, ಕೃಷ್ಣಾ ನಿನ್ನ ಸೇವೆ ತಂದೆ" ಎಂದು ಹೇಳಿಕೊಳ್ಳುತ್ತಿರುವುದನ್ನು ಈಗಲೂ ಅಲ್ಲಲ್ಲಿ ಕೇಳುತ್ತಿದ್ದೇವೆಯಲ್ಲವೆ? ಇದಕ್ಕರ್ಥವೇನು? "ಸಂಸಾರವೆಂಬುದು ಸ್ವಾರ್ಥ ಸಾಧನೆಗಾಗಿ ಬದುಕುವುದಲ್ಲ. ಸಂಸಾರನಿರ್ವಹಣ ಕಾರ್ಯವೂ ಭಗವತ್ಸೇವೆಯೇ! ವಿಶ್ವಕುಟುಂಬಿಯಾದ ಪರಮಾತ್ಮನು ತನ್ನ ಅಗಾಧವಾದ ಈ ವಿಶ್ವದಲ್ಲಿ, ಈ ನಾಲ್ಕಾರು ಮಂದಿಯನ್ನು ಪೋಷಿಸುವ-ಸೇವಿಸುವ ಭಾರವನ್ನು ತನ್ನ ವಶಕ್ಕೆ ವಹಿಸಿರುವನಾದುದರಿಂದ ಇದೂ ಭಗವತ್ಸೇವಾಕಾರ್ಯವೇ!" ಎಂದು ಭಾವಿಸಿ, ನಿರ್ಮಮತೆಯಿಂದ ಪೂರ್ವಿಕರು ಸಾಂಸಾರಿಕ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಈ ಅರ್ಥವನ್ನು ಅನುಸರಿಸಿ ಯೋಚಿಸಿದರೆ, ನಮ್ಮ ಸ್ತ್ರೀಯರು ಮನೆಯುಲ್ಲಿ ಮಾಡಿಕೊಳ್ಳಬೇಕಾದ ಸಾರಿಸುವುದು, ಗುಡಿಸುವುದು, ಕಸಮುಸುರೆಗಳು, ಮಕ್ಕಳ ಪೋಷಣೆ, ಬೀಸಿಕೊಳ್ಳುವುದು, ಕುಟ್ಟುವುದು, ನೀರುಸೇದುವಿಕೆ, ಬಟ್ಟೆಯೊಗೆಯುವಿಕೆ ಮುಂತಾದ ಮನೆಗೆಲಸಗಳು ದಾಸ್ಯಕ್ಕಾಗಿ ಮಾಡುವವುಗಳಲ್ಲ! ಮನೆಯ ಅನುಕೂಲತೆಗಾಗಿ ಮಾಡಿಕೊಳ್ಳುವ ಈ ಕೆಲಸಗಳೇ ಸೇವಾಕಾರ್ಯವೆಂಬ ಅಷ್ಟು ಉನ್ನತವಾದ ನಿರ್ಮಮತೆಯ ಭಾವವು ಉಂಟಾಗದಿದ್ದರೂ ಅವರಿಗೆ ಅತ್ಯುತ್ತಮ ಅಂಗಸಾಧನೆಯಾಗಿಯಾದರೂ ಏರ್ಪಡುವುದೆಂದು ಯೋಚಿಸಬಹುದಲ್ಲವೆ? ದಿನದ ಅರುವತ್ತು ಗಳಿಗೆಯೂ

ಮನೆಯನ್ನು ಬಿಟ್ಟು ಹೊರಕ್ಕೆ ಹೊರಡದ ನಮ್ಮ ಸ್ತ್ರೀಯರ ಸಕಲ ಅವಯವಗಳಿಗೂ ತಕ್ಕಷ್ಟು ಅಂಗಸಾಧನೆಯನ್ನು ಮನೆಯ ಈ ಕಾರ್ಯಗಳೇ ಉಂಟುಮಾಡುವುವೆಂಬುದಕ್ಕೆ ಸಂದೇಹವುಂಟೆ! ಮನೆಗೆಲಸಗಳನ್ನು ಈ ಭಾವನೆಯಿಂದ ನೋಡದೆ ದುರ್ಲಕ್ಷಿಸಿ, ಗೌರವಕ್ಕೆ ಹಾನಿಕರವೆಂದು ಭಾವಿಸಿ, ಚಂಡಾಟವನ್ನು ಆಡಿ ತನ್ಮೂಲಕ ವ್ಯಾಯಾಮವನ್ನು ಹೊಂದುತ್ತೇವೆಂದು ಎಣಿಸುವುದು ಪ್ರಕೃತ ನಮ್ಮ ದೇಶದ ಬಡತನಸ್ಥಿತಿಗೆ ಯೋಗ್ಯವಾದುದೆ? ಹಿಂದೂ ನಾಗರಿಕತೆಯ ಶ್ರೇಷ್ಠ ತತ್ವಗಳನ್ನು ಗಮನಿಸಿ, ಆರ್ಯಸ್ತ್ರೀ ಯೋಗ್ಯವಾದ ಘನಗಾಂಭೀರ್ಯ ಮಾನಮರ್ಯಾದೆಗಳ ಗೌರವವನ್ನು ಯೋಚಿಸಿ, ಪಾಶ್ಚಾತ್ಯ ಸ್ತ್ರೀಯರನ್ನು ನೋಡಿ ಅವರಲ್ಲಿಯ ಅತ್ಯುತ್ತಮ ಗುಣಗಳನ್ನು ಮಾತ್ರ ಗ್ರಹಿಸಿ, ಅದನ್ನು ನಮ್ಮವರ ಅಭಿವೃದ್ಧಿಗಾಗಿ ಉಪಯೋಗಿಸಬೇಕಾದುದು ಸದ್ಯಃ ಆವಶ್ಯಕವಲ್ಲದೆ, ನಾವೂ ವಿಚಾರವಿಲ್ಲದೆ ಅವರನ್ನು ಅನುಸರಿಸುವುದಲ್ಲ. ಅಮೆರಿಕಾ, ಇಂಗ್ಲಾಂಡು ದೇಶಗಳಲ್ಲಿ ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಹೊಡೆದಾಡುತ್ತಿದ್ದವರಲ್ಲಿ ಎಷ್ಟೋಮಂದಿ ಸ್ತ್ರೀಯರು ಅದರಿಂದ ಉಂಟಾಗುವ ಕಷ್ಟನಷ್ಟಗಳನ್ನು ಅನುಭವದಿಂದ ತಿಳಿದು ಈಗಾಗಲೇ 'ಸ್ತ್ರೀಯರ ಕಾರ್ಯಸ್ಥಾನವು ಮನೆ, ಅವರ ಕಾರ್ಯವು ಪತಿ ಪುತ್ರ-ಪುತ್ರಿಯರ ಪೋಷಣೆ, ಅತಿಥಿ ಅಭ್ಯಾಗತರ ಆದರಣೆ ಮತ್ತು ಯುಕ್ತ ಗೃಹಧರ್ಮಪಾಲನೆ' ಎಂಬುದನ್ನು ಮನಗಂಡು ಈ ನವೀನನಾಗರಿಕತೆಯನ್ನು ಅನುಸರಿಸಿ ಓಡುವ ಹುಚ್ಚುತನವನ್ನು ಬಿಟ್ಟು ಹಿಂದಿರುಗುತ್ತಿದ್ದಾರೆಯಂತೆ! ಆದುದರಿಂದ ನಾವೂ ಈಗ "ನಾವಾರು, ನಮ್ಮ ದೇಶವಾವುದು, ನಮ್ಮ ದೇಶದರೀತಿನೀತಿಗಳೇನು, ಆಚಾರವ್ಯವಹಾರಗಳು ಎಂಥವು, ಏನುಕಾರಣ ಏರ್ಪಟ್ಟುವು, ಅವು ಎಷ್ಟುಬಗೆಯಲ್ಲಿ ನಮ್ಮ ಐಹಿಕಪಾರತ್ರಿಕ ಸಾಧನೆಗೆ ಉಪಯುಕ್ತವಾಗಿವೆ" ಎಂಬುದನ್ನು ಯೋಚಿಸಬೇಕಾಗಿದೆಯೆಂದು ವಿನಯಪೂರ್ವಕವಾಗಿ ಸೂಚಿಸುತ್ತೇವೆ.

ಇದರಿಂದ 'ಸ್ತ್ರೀ ವರ್ಗವನ್ನೇ ನಿರ್ಬಂಧಪಡಿಸಿ, ಮೌಢ್ಯದಲ್ಲಿ-ದಾಸ್ಯದಲ್ಲಿಟ್ಟು ಅವರಿಂದ ಸೇವೆ ಮಾಡಿಸಿಕೊಳ್ಳುವುದಕ್ಕಾಗಿ ಪುರುಷರು ಹೇಳುವ ನೀತಿಗಳಿವು' ಎಂದು ಮಾತ್ರ ದಯವಿಟ್ಟು ಭಾವಿಸಲಾಗದು. ಗೃಹಕಾರ್ಯದಲ್ಲಿ ಪುರುಷನ ಭಾಗವೂ ಇಲ್ಲದೆ ಇಲ್ಲ. ಅವನೂ ಮನೆಯಲ್ಲಿನ ಸರ್ವರ ಮೇಲ್ಮೆಗಾಗಿ ಮೈಮುರಿದು ನಿಸ್ಪೃಹತೆಯಿಂದ ದುಡಿಯಲೇಬೇಕು. ಮನೆಯಲ್ಲಿನ ಸಕಲರ ನ್ಯಾಯವಾದ ಅಪೇಕ್ಷೆಗಳನ್ನೂ ತೀರಿಸಿ, ಕುಟುಂಬದ ಅಭಿವೃದ್ಧಿಯನ್ನು ಗಮನಿಸುವಲ್ಲಿ ಪುರುಷನ ಭಾಗವು ಹೆಚ್ಚು ಉತ್ತರವಾದಿತನದ್ದಾಗಿದೆ. ಹೀಗೆ ಗೃಹಿಣಿ-ಗೃಹಸ್ಥ ಈ ಇಬ್ಬರಿಗೂ ಗೃಹಕಾರ್ಯನಿರ್ವಹಣದಲ್ಲಿ ಪ್ರತ್ಯೇಕವಾದ ಕೆಲಸಗಳು ಏರ್ಪಟ್ಟಿವೆ. ಇವುಗಳು ವ್ಯತ್ಯಾಸವಾದರೆ ಸಂಸಾರವೇ ಅವ್ಯವಸ್ಥೆಗೀಡಾಗುವುದು. ಪುರುಷನೂ-ಸ್ತ್ರೀಯೂ, ಪತಿಯೂ-ಪತ್ನಿಯೂ ಐಕ್ಯಭಾವದಿಂದ ಒಟ್ಟು ಕುಟುಂಬದ ಮೇಲ್ಮೆಯನ್ನು ಗಮನಿಸಬೇಕು. ಅಂದಿಗೆ ಸಂಸಾರದಲ್ಲಿನ ದುಃಖ ತಾಪತ್ರಯಗಳು, ಗೃಹಕಲಹಗಳು, ಮೋಸ ಕಾಪಟ್ಯಗಳು ಎಲ್ಲವೂ ತೊಲಗಿ ಭೂತಳಕ್ಕೆ ಸ್ವರ್ಗವೇ ಇಳಿದುಬಂದಂತೆ ಆಗುವುದು. ಹಾಗೆ ಒಂದು ಸಂಸಾರವು ಒಂದು ಕುಟುಂಬವು ಶುದ್ಧವಾಯಿತೆಂದರೆ ಅದರ ಉದಾಹರಣೆಯಿಂದ ಮತ್ತೊಂದು, ಇನ್ನೊಂದು ಹೀಗೆ ಅನೇಕ ಕುಟುಂಬಗಳು ಉತ್ತಮಸ್ಥಿತಿಯನ್ನು ಹೊಂದಬಹುದು. ಜನಾಂಗವೆಂಬುದು ಅನೇಕ ಕುಟುಂಬಗಳ ಮೊತ್ತವೇ ಅಲ್ಲವೆ! ಒಂದೊಂದು ಕುಟುಂಬವೂ ಹೀಗೆ ಉತ್ತಮಸ್ಥಿತಿಯನ್ನು ಹೊಂದುತ್ತ ನಡೆದಂತೆ ಜನಾಂಗವೇ ಉತ್ತಮಸ್ಥಿತಿಗೆ ಬರುವುದು. ಈ ವಿಷಯದಲ್ಲಿ ಸಂದೇಹವುಂಟೆ?

ಕರ್ಣಾಟಕ ಮಾತಾ-ಪಿತೃಗಳು ಮೇಲೆ ಹೇಳಿದಂತೆ ಗೃಹಧರ್ಮಪಾಲನಾ ವಿಷಯದಲ್ಲಿ ಶ್ರದ್ಧಾವಂತರಾಗಿ ತಮ್ಮ ಪುತ್ರಿಯರನ್ನೂ, ಪುತ್ರರನ್ನೂ ಪೂರ್ವಿಕರ ಆಚರಣೆಗಳ ಆದರ್ಶವನ್ನಿಟ್ಟುಕೊಂಡು ಯುಕ್ತರೀತಿಯಿಂದ ಶಿಕ್ಷಿಸತಕ್ಕದು ಯುಕ್ತವೂ, ಆವಶ್ಯಕವೂ ಆಗಿದೆ. ಅವರು ಪ್ರೌಢರಾಗಿ ಲೌಕಿಕ ಯಾತ್ರೆ

ಯಲ್ಲಿ ಪ್ರವೇಶಿಸುವುದಕ್ಕೆ ಮುಂಚೆ ಸಂಸಾರವೆಂದರೆ ಏನು, ವರು ಅದರಲ್ಲಿ ಅನುಸರಿಸಬೇಕಾದ ಧರ್ಮಗಳಾವುವು, ಮಾಡ ಬೇಕಾದ ಕೃತ್ಯಗಳೇನು, ಇವುಗಳಲ್ಲಿ ಕ್ರಮವಾಗಿ ಶಿಕ್ಷಿತರಾಗಿ ನಂತರ ಸಂಸಾರದಲ್ಲಿ ಪ್ರವೇಶಿಸಲು ಅವಕಾಶವನ್ನು ಕಲ್ಪಿಸಬೇಕಲ್ಲದೆ ಕೇವಲ ಯುಕ್ತವಯಸ್ಕರಾದುದರಿಂದ ಮಾತ್ರವೇ ಸಂಸಾರಕಾರ್ಯ ಕ್ಕೆ ಯೋಗ್ಯರಾದರೆಂದು ಭಾವಿಸುವುದಾಗಲೀ ಅಥವಾ ವಧೂ ವರರಿಬ್ಬರೂ ಪಾಶ್ಚಾತ್ಯ ವಿದ್ಯಾಭ್ಯಾಸ ಮಾಡಿರುವರಾದ್ದರಿಂದ ಗೃ ಹಧರ್ಮವನ್ನು ಪಾಲನೆ ಮಾಡಿಕೊಳ್ಳುವರು ಎಂದು ಭಾವಿಸುವು ದಾಗಲೀ ಕೆಲಕೆಲವುವೇಳೆ ಅಸಂಗತವಾಗಿ ಪರಿಣಮಿಸುವುದು. "ಹೆಂಡತಿಯು ಗಂಡನ ವಿಷಯದಲ್ಲೂ, ಬಂಧು ಬಾಂಧವರ ವಿಷಯ ದದಲ್ಲೂ ಹೇಗೆ ನಡೆದುಕೊಳ್ಳಬೇಕು! ತನ್ನ ಗಾಂಭೀರ್ಯವನ್ನು ಕಾಯ್ದುಕೊಂಡು ಪತಿಯನ್ನು ಉತ್ತಮ ರೀತಿಯಲ್ಲಿ ಅನುಸರಿಸುವ ಮಾರ್ಗವಾವುದು? ಮಕ್ಕಳ ಪೋಷಣೆ, ಮನೆಯುವರ ಆರೋಗ್ಯ ರಕ್ಷಣೆ, ಅತಿಥಿ ಅಭ್ಯಾಗತರ ಆದರಣೆ, ಆಹಾರಪಾನೀಯಗಳ ಸಿದ್ಧತೆ ಇವುಗಳು ಸಂಸಾರವಂದಿಗರಾಗಿ ಗಂಡನ ಮನೆಗೆ ಹೋಗುವ ಮೊದ ಲು ಹೆಣ್ಣುಮಕ್ಕಳಿಗೆ ತಿಳಿದಿರಬೇಕಾದ ಅಂಶಗಳಲ್ಲವೆ?

ಇದರಿಂದ ಸ್ತ್ರೀ ಸಮಾಜದ ಅಭಿವೃದ್ಧಿಯ ವಿಷಯದಲ್ಲಿ ಪ್ರಕೃ ತ ನಡೆಯುತ್ತಿರುವ ಕಾರ್ಯಗಳನ್ನು ಕುರಿತು ನಾವು ಅಸೂಯೆಪಡು ವೆವೆಂದಾಗಲೀ, ವಿರೋದಾಭಿಪ್ರಾಯವನ್ನುಂಟಾಗಿರುವೆವೆಂದಾಗಲೀ ಅರ್ಥವಲ್ಲ. ಸ್ವಭಾವಸಿದ್ಧವಾದ, ದೇಶೀಯ ರೀತಿನೀತಿಗಳಿಗೆ ವಿರೋ ಧವಿಲ್ಲದೆ ನಡೆವ ಸಕಲ ಕಾರ್ಯಗಳಿಗೂ, ಜನಾಂಗದ ಹಿತಚಿಂತಕ ನಾದ ಪ್ರತಿಯೊಬ್ಬನ ಸಮ್ಮತಿಯೂ ಉಂಟು. ಆದರೆ ಅದು ಆ ರ್ಷೇಯವಾದ ಧರ್ಮದ ಗೌರವಕ್ಕೆ ವಿರೋಧವಾದುದಾಗಿ, ವಿಷ ಯೇಂದ್ರಿಯಗಳ ಚಪಲತೆಯನ್ನು ಪೂರ್ಣಮಾಡಿಕೊಳ್ಳುವ ಸಾಧನ ವಾಗಿ, ಬಿಸಿಲ್ಗುದುರೆಯಂತೆ ತೋರುವ ನವನಾಗರಿಕತೆಯ ಥಳಕು ಬೆಳಕಿಗೆ ಮೋಹಗೊಂಡುದಾಗಿದ್ದರೆ ಮಾತ್ರ, ಅದು ದೇಶೀಯ ಗೌರ

ವಕ್ಕೆ ಕುಂದನ್ನು ತರುವುದಾದುದರಿಂದ ಅದನ್ನು ಪ್ರತಿಯೊಬ್ಬ ನ್ಯಾಯಪಕ್ಷಪಾತಿಯೂ ವಿರೋಧಿಸಲೇ ಬೇಕಾಗುವುದು.

ಪ್ರಾಜ್ಞರಾದ ಕರ್ಣಾಟಕ ಮಾತಾ-ಪಿತೃಗಳು ಈ ವಿಷಯಗಳನ್ನು ಗಮನಕ್ಕೆ ತಂದು ಸಾಧ್ಯವಿರುವಂತೆಲ್ಲಾ ನಮ್ಮ ದೇಶದ ಸನಾತನ ಆಚಾರವಿಚಾರಗಳಲ್ಲಿ ಆಸಕ್ತಿಯನ್ನು ತೋರಿಸುತ್ತಾ, ತನ್ಮೂಲಕ ಇತರರಿಗೂ ಮಾರ್ಗದರ್ಶಕರಾಗುತ್ತಾ ಬರಬೇಕಾದುದು ಪ್ರಕೃತಸ್ಥಿತಿಯಲ್ಲಿ ಅತ್ಯಾವಶ್ಯಕವಾಗಿದೆ. ಮತ್ತು ಗೃಹಧರ್ಮಪಾಲನೆಯೇ ಸ್ತ್ರೀಯರ ಮುಖ್ಯ ಕರ್ತವ್ಯವಾಗಿ, ಅವರ ಆಚರಣೆಯೇ ಕುಟುಂಬದ ಉನ್ನತಿ ಅಥವಾ ಅವನತಿಗೆ ಕಾರಣವಾಗುವುದರಿಂದ ಅವರಿಗಾಗಿಯೇ ರಚಿಸಲ್ಪಟ್ಟಿರುವ ಈ ಚಿಕ್ಕ ಪುಸ್ತಕವು ಸಾಧ್ಯವಾದಷ್ಟುಮಟ್ಟಿಗೆ ತಮ್ಮ ನೆರೆಹೊರೆಯವರಲ್ಲೂ ಪ್ರಚಾರವಾಗಲು ಅವಕಾಶವನ್ನು ಕಲ್ಪಿಸಿ, ಗ್ರಂಥಮಾಲೆಗೆ ಪ್ರೋತ್ಸಾಹವನ್ನು ಕೊಡಬೇಕಾಗಿಯೂ ಈ ಮೂಲಕ ಪ್ರಾರ್ಥಿಸುತ್ತೇವೆ.

ಇತಿ ಸುಜನವಿಧೇಯ,

**ಯಂ. ರಾಮರಾವ್,**



**ದ್ವಿತೀಯಮುದ್ರಣ. ೩೦೦೦ ಪ್ರತಿಗಳು. ಜನವರಿ ೧೯೨೫.**

ದಿ. ಪವರ್ ಪ್ರಿಂಟಿಂಗ್ ವರ್ಕ್ಸ್, ಚಿಕ್ಕಪೇಟೆ, ಬೆಂಗಳೂರು ಸಿಟಿ.

॥ ಶ್ರೀ ॥

# ಮಹಿಳಾ ಸುನೀತಿ ಶತಕ.



॥ ಕಂದಪದ್ಯ ॥

ಗಜಮುಖನಂ ರಘುವರನಂ ।
ತ್ರಿಜಗಾಧಿಪ ಪಾರ್ವತೀಶ ವಾಣೀಧವರಂ ॥
ಭಜಿಸುತಲುಮೆ ಲಕುಮಿಯರಂ ।
ಅಜನರಸಿಯ ಪಾದಪದ್ಮಗಳಿಗೊಂದಿಸುವೆಂ ॥ ೧ ॥

ಆದಿಕವಿ ವಾಲ್ಮಿಕೋದ್ಭವ ।
ನಾದಾಪ್ರಾಚೇತಸಾಖ್ಯ ಮುನಿವರನಡಿಯಂ ॥
ಆದರದಿಂದಲಿ ಭಜಿಸುತ ।
ಮೋದದಿ ಬಲಗೊಂಬೆ ವ್ಯಾಸರಡಿದಾವರೆಯಂ ॥ ೨ ॥

ಕಾಳಿಯವರದಿಂ ಜಗದೊಳು ।
ಮೇಲೆನಿಪಾ ಕವಿತೆಗಳನು ಪೇಳಿದ ಮಹಿಮಾ ॥
ಶಾಲಿಯ ವರ ಕಾಳಿದಾಸನ ।
ಚೀಲ್ಕೊಳುತಲಿ ಪೇಳುತಿಹೆನು ಶತಕಮನಿದನಾಂ ॥ ೩ ॥

ಕನ್ನಡ ಕವಿವರರೊಳು ಸಂ।
ಪನ್ನಂ ಲಕ್ಷ್ಮೀಶ ಭಾರತಾಖ್ಯೆಯ ಪೇಳ್ದಾ॥
ಮುನ್ನಿನ ಕುಮಾರವ್ಯಾಸನ।
ರನ್ನನ ಸಿತ್ಯಾತ್ಮಜಕನ ವಂದಿಪೆ ಮುದದೊಳ್ ॥ ೪ ॥

ಜಗದೊಳು ಪೆಂಗಳ ಧರ್ಮವ।
ಮಿಗೆ ಚೆಲ್ವಿಂ ಮೆರೆವ ಕನ್ನಡದ ನುಡಿಯೊಳ್ ನಾಂ॥
ಬಗೆಗೊಳೆ ಪೇಳ್ವೆನು ಸುಜನರು।
ಹಗರಣಮಂ ತೊರೆದು ಸ್ವೀಕರಿಪುದಿದ ನೀಗಳ್ ॥ ೫ ॥



# ಮಹಿಳಾ ಸುನೀತಿ ಶತಕ.

ಅರುಣೋದಯದಲ್ಲೇಳುತ ।
ನಿರ್ಮಲ ಜಲದಿಂದ ಶುಚಿಯಪೊಂದುತ ಮತ್ತಾ ॥
ಹರಿಹೃದಯವಾಸಿನಿಯನಾ ।
ತರುಣೀಮಣಿ ತುಲಸಿಯನ್ನು ವಂದಿಸು ಮಹಿಳೇ ॥ ೧ ॥

ಗೋಮಾತೆಯನ್ನು ಪೂಜಿಸು ।
ಕಾಮನ ಪೆತ್ತವಳ ಪಾದಕಮಲಗಳನು ನೀಂ ॥
ನೇಮದಿ ಭಜಿಸೌ ನಿರುತಂ ।
ತಾಮಸವನು ಕಳೆದು ಕೀರ್ತಿವಡೆಯೆಲೆ ಮಹಿಳೇ ॥ ೨ ॥

ಅಂಗಳವನುಡುಗಿ ಸಾರಿಸಿ ।
ಮಂಗಳಕರ ರಂಗವಲ್ಲಿಗಳನಿಡು ಮತ್ತಾ ॥
ರಂಗನ ಮಡದಿಯ ತುಲಸಿಯ ।
ಸಿಂಗರಿಸೌ ಕುಂಕುಮಾದಿಗಳಿನೆಲೆ ಮಹಿಳೇ ॥ ೩ ॥

ಹರಟುತನಿಲ್ಲದೆ ತ್ವರಿತದಿ ।
ಬೆರೆಯೌ ಬೇಸರವನುಳಿದು ಗೃಹಕಾರ್ಯದಿ ನೀಂ ॥
ಪರಿಪರಿಯ ಉದಯರಾಗವ ।
ಮರೆಯದೆ ನೀಂ ಪಠಿಸಿಕೊಳ್ಳು ಮುದದೊಳು ಮಹಿಳೇ ॥ ೪ ॥

ಮಕ್ಕಳನೇಳಿಸು ಶೀಘ್ರದಿ ।
ಚೊಕ್ಕಟದಿಂ ಮೊಗವದೊಳೆದು ಮೋದದೊಳವರಂ ॥
ಅಕ್ಕರೆಯಿಂ ಸಿಂಗರಿಸೌ ।
ಅಕ್ಕ ಕುಲಾಚಾರವನ್ನು ಮರೆಯದೆ ಮಹಿಳೇ ॥ ೫ ॥

ಪತಿಯನು ವಂದಿಸು ಭಕ್ತಿಯೊ ।
ಳತಿ ಸೊಬಗಿಂಗೆಯ್ಯುತಾತನಾಣತಿಗಳನಂ ॥
ಹಿತದೊಳ್ಚರಿಸುತಲಿರೆ ಮುಂ ।
ದತಿ ಸೊಬಗಂಬಡೆವೆ ದಿಟದಿನರಿಯಿದ ಮಹಿಳೇ ॥ ೬ ॥

ಕೊಳೆಯೂದುಡಿಗೆಗಳಂ ಕಳೆ ।
ದುಳಿಯದೆ ಸ್ವಚ್ಛವಹ ವಸನಗಳ ತೊಡಿಸುತಲಾ ॥
ಎಳೆಯರು ಸಂತಸಿಪಂದದೆ ।
ಪಳಿಯದೆ ಕಳುಹಿಸುವುದವರ ಮಠಕೆಲೆ ಮಹಿಳೇ ॥ ೭ ॥

ಪಸಿದೋದುವು ದಾರೋಗ್ಯವ ।
ಹಸಗೆಡಿಸುವು ದದರಿನವರ ಮಠಕೇಗಿಪ ಮುಂ ॥
ಪಸಿವನು ತಣ್ಪಿಸಿ ಶಾಂತಿಯೊ ।
ಳೆಸೆವಂತಿರೆ ಕಳುಹಿಸಣುಗಿಯಣುಗರ ಮಹಿಳೇ ॥ ೮ ॥

ಮನೆಗೆಲಸಗಳಂ ಶಾಂತಿಯೊ ।
ಳಿನನಂ ಮೆಚ್ಚಿಪೊಡೆಗೈಯುತಲೆ ತಳುವದೆ ನೀಂ ॥
ಮನದೊಳ್ ಸಂತಸದಾಳುತೆ ।
ಘನವಂತೆಯೆ ಜಳಕಗೈವುದಡುಗೆಗೆ ಮಹಿಳೇ ॥ ೯ ॥

ಮಲಿನತೆಯಿಂದುದಯಿಪುದಾ ।
ಮಲಿನತೆಯೇ ಜಾಡ್ಯವದನು ಪೋಷಿಪುದದರಿಂ ॥
ಜಳಕದೆ ದೇಹವ ಮೇಣ್ನೀ ।
ನುಳಿಯದೆ ಪ್ರತ್ಯಂಗಗಳನು ಶುಚಿಯಿಸು ಮಹಿಳೇ ॥ ೧೦ ॥

ಮಡಿಯಾದ ವಸ್ತ್ರಗಳನುಡು ।
ಇಡು ಮಂಗಳಕರಗಳಾದ ಚಿಹ್ನೆಯ ನೊಸಲೊಳ್ ॥
ಬಿಡುತನ್ಯ ಚಿಂತೆಗಳ ನೀ ।
ನಿಡುಮನಮಂ ದೇವದೇವನಡಿಯೊಳು ಮಹಿಳೇ ॥ ೧೧ ॥

ಮಂಗಳಕರಳಹ ಗೌರಿಯ ।
ತುಂಗಯಶೋಮಹಿತೆ ಕಾಮಜನನಿಯ ಮತ್ತಾ ॥
ಅಂಗನೆ ಶಾರದೆಯಂ ಸ ।
ನ್ಮಂಗಳೆ ಮರೆಯದಲೆ ಭಜಿಪುದನುದಿನ ಮಹಿಳೇ ॥ ೧೨ ॥

ಬೆಸನವಗೊಳ್ಳದೆ ಬೈಯದೆ ।
ಕಸವಸೆಯೊಳ್ಮನವನಿಡದೆ ಬೇಸರಿಸದೆ ನೀಂ ॥
ಹಸನಾದಡುಗೆಯನಡುತಲಿ ।
ನಸುನಗೆಯಿಂ ಬೆರೆದು ಬಡಿಸು ನಯದೊಳು ಮಹಿಳೇ ॥ ೧೩ ॥

ಬೇಯಿಸಿ ಬಡಿವುದು ಘನವೇಂ ।
ಆಯಾಸವ ನೀಯುತುಣ್ಬರಿಗೆ? ಪೇಳ್ಮನದಾ ॥
ಆಯಾಸವ ಕಳೆಯುತ ಪುನ ।
ರಾಯುವನೀವಂತೆ ಬಡಿಸು ಪ್ರಿಯದಿಂ ಮಹಿಳೇ ॥ ೧೪ ॥

ಪತಿಭುಂಜಿಪುದಕೆ ಪೂರ್ವಮೆ ।
ಸತಿಭುಂಜಿಸುತಿಹುದು ಸಲ್ಲದದುಕಾರಣದಿಂ ॥
ಪತಿಗಿಕ್ಕಿ ತೋಷಿಸಿದ ಬಳಿ ।
ಕತಿಮುದದೊಳ್ ಭುಂಜಿಸನುದಿನಂ ನೀಂ ಮಹಿಳೇ ॥ ೧೫ ॥

ಭೋಜನ ಸಮಯದಲಿತರರ |
ವ್ಯಾಜ್ಯವ ಪೇಳದಿರು, ವ್ಯಸನಕರವಹ ಕಲಹ ||
ವ್ಯಾಜಂಗಳೆತ್ತದಿರು, ಮುದ |
ರಾಜಿಸುತಿರಲಿದನು ತಿಳಿದು ನಡೆಯೌ ಮಹಿಳೇ || ೧೬ ||

ಪಾಚಕರನಿಟ್ಟು ನೀಂ ಬಹು |
ನೀಚವುಗೃಹಕಾರ್ಯವೆಂದು ಬೀಗಿದರಹುದೇಂ ||
ನೀಚವೊ ಭುಜಿಪುದು ? ಭೋಜನ |
ಕಾಚೆಯುದೇಂ ಗೈವೆ ಪೇಳು ಗೃಹದೊಳು ? ಮಹಿಳೇ ||೧೭||

ಕಾಲವ ತಪ್ಪದೆ ಮಕ್ಕಳಿ |
ಗಾಲಸ್ಯವ ತೊರೆದು ಕಾಲಕಾಲಕೆ ಯುಣಿಸಂ ||
ಮೇಲುಂತಿಂಡಿಯ ನಿಡುತಿರೆ |
ಮೇಲಹುದಿದಬಿಡಲು ಕೇಡು ತಪ್ಪದು ಮಹಿಳೇ || ೧೮ ||

ನೆರೆಯವರೊಂದಿಗೆ ಹರಟೆಯ |
ಹರಟುತ ಕಾಲವನು ಕಳೆಯೆ ಫಲವೇನದರಿಂ ? ||
ಬರೆದೋದು ಕೇಳು ಪೂರ್ವಿಕ |
ನರನಾರೀಮಣಿಯರಿರವ ಮುದದೊಳು ಮಹಿಳೇ || ೧೯ ||

ಅತಿಥಿಗಳನ್ನಾದರಿಸುತ |
ಸತತವು ಲೋಭವನೆ ತೊರೆದು ಗೃಹಕಾರ್ಯಗಳಂ ||
ಮಿತದಿಂ ನಡೆಯಿಸೆ ಲೋಕದ |
ಲತಿಸೊಬಗಿಂ ಬಾಳಲಹುದು ತಿಳಿಯಿದ ಮಹಿಳೇ || ೨೦ ||

ಪರದೇಶಿಗಳಂ ಪಾಪಿಗ ।
ಳುರು ಕಷ್ಟಕೆ ಸಿಲುಕಿ ನೊಂದವರ ಬಳಗಗಳಂ ॥
ಪರಿಪರಿ ಯಂಗವಿಹೀನರ ।
ನೆರೆಮನ್ನಿಸಿ ಪೋಷಿಸುವುದು ಧರ್ಮವು ಮಹಿಳೇ ॥ ೨೧ ॥

ಗೃಹಕಾರ್ಯವ ಪರಿಗಣಿಸದೆ ।
ಸಹಜಾತರ ಕಷ್ಟ ಸಂಕಟಗಳಿಗೆ ಮನದೊಳ್ ॥
ಬಹು ಮರುಕ ಗೊಳ್ಳದಿರುತಿರೆ ।
ಇಹಪರಮಂ ಪೊಂದಲರಿದು ಗಮನಿಸು ಮಹಿಳೇ ॥ ೨೨ ॥

ನೆರೆಯವರೊಳ್ ಸುಸ್ನೇಹಂ ।
ಪಿರಿಯರೊಳಂ ಬಂಧುಮಿತ್ರರೊಳು ಸೌಜನ್ಯಂ ॥
ಪರಮೇಶ್ವರನೊಳ್ ಭಕ್ತಿಯು ।
ನೆರೆಯಲವಳ್ ದಿವಿಜೆ ಧರೆಯೊಳರಿಯಿದ ಮಹಿಳೇ ॥ ೨೩ ॥

ಮನೆಯಂ ವಸ್ತ್ರವ ಪಾತ್ರೆಯ ।
ನಿನಿಯನ ವಸ್ತುಗಳ ಶುಚಿಯನಾಗಿಸಿ ಮನದೊಳ್ ॥
ಅನವರತವು ಸಂತಸದಿಂ ।
ದಿನಿಯನ ಪ್ರೀತಿಪಳು ಧನ್ಯೆ ಜಗದೊಳು ಮಹಿಳೇ ॥ ೨೪ ॥

ಗುರುಹಿರಿಯರನಾದರಿಸುತ ।
ಪರದೇಶಿಗಳಿರವ ನೋಡಿ ಮರುಕದಿ ನೀಡು ॥
ತ್ರುರಿವುಳ್ಳರ ಸ್ನೇಹಿಸುತಿಹ ।
ತರುಣೀಮಣಿ ಮಾನ್ಯೆ ಜಗದೊಳರಿಯಿದ ಮಹಿಳೇ ॥ ೨೫ ॥

ಹೆರವರ ಮೆಚ್ಚಿಕೆಗಳಿಗುಂ, ।
ಗರ್ವವ ತೋರುತಲಿ, ಶಿರಿಯ ಮದದಿಂದಲು ಮುಂ ॥
ಬರುವುದನರಿಯ ದಶ್ರದ್ಧೆಯು ।
ಭರದಿಂ, ದಾನವನು ಗೆಯ್ಯೆ ಫಲವೇಂ? ಮಹಿಳೇ ॥ ೨೬ ॥

'ಮಾಡಲು ಕೃತ್ಯವೆಯಿಲ್ಲೆ' ನು ।
ಕಾಡುತ ಕುಹಕಗಳ ಕವಡೆಯಾಟಗಳನು ತಾವ್ ॥
ಪಾಡಾಗಿಸುವರು ಕಾಲವ ।
ಮೂಢರು ಮತಿಹೀನರವರು ಗಮನಿಸು ಮಹಿಳೇ ॥ ೨೭

ನಾಲ್ವರು ಸೇರಿದೊಡಿತರರ ।
ಮೇಲ್ಸಲ್ಲದ ದೂರನಾಡಿ ವ್ಯಾಜ್ಯವ ಮೊಳೆಪರ್ ॥
ಪೇಳ್ವುದುಸಲ್ಲದು, ನಿನ್ನಯು ।
ಬಾಳ್ವೆಯಿನವರಿರವತಿದ್ದು ಉಚಿತದಿ ಮಹಿಳೇ ॥ ೨೮ ॥

ಬರಿಮನೆಯೊ ಬಡತನಂಗಳೊ ।
ಅರೆಹೊಟ್ಟೆಯೊ, ಚಿಂದಿ ಗುಡ್ಡೆವ್ಯಾಜ್ಯವೊ ಮನೆಯೋಳ್ ॥
ಪೆರರೊಳ್ ಪೇಳ್ದೊಡೆ ಫಲವೇಂ? ।
ಪರಿಪರಿಯಿಂ ಹಾಸ್ಯಗೈದು ನಗುವರು ಮಹಿಳೇ ॥ ೨೯ ॥

ಪುರುಷನ ಬಡತನಗಳಿಗುಂ ।
ನೆರೆಮೆಚ್ಚುವ ತೆರದೊಳಿರದ ಹೀನತೆಗುಂ ಮೇ ॥
ಣರಿವೊಳ್ ಕುಂದಿರ್ಪುದಕುಂ ।
ಪೆರರೇಂಗೈಯುವರು ಪೇಳ್ದೊಡಿದನೆಲೆ ಮಹಿಳೇ ॥ ೩೦ ॥

ಪೆರರಂ ನಿಂದಿಸಿ ಫಲವೇಂ? ।
ಮುರಿದುದ ಸರಿಗೊಳಿಸಲೆಮಗೆ ಸಾಧ್ಯದೊಳಿರಲಾ ॥
ನೆರೆಮೆಚ್ಚಿಪಂತೆ ಬಾಳ್ವೊಡೆ ।
ನೆರೆಯೌ ಗೃಹಕಾರ್ಯದೊಂದಿಗೆಂದುಂ ಮಹಿಳೇ ॥ ೩೧ ॥

ಅತ್ತಿಗೆ ನಾದಿನಿಯರನುಂ ।
ಅತ್ತೆಯ ಮಾವಂದಿರವರ ಬಂಧುಗಳಂ ಮೇಣ್ ॥
ಸುತ್ತಲಿನ ವ್ಯಕ್ತಿಗಳನುಂ ।
ನೊತ್ತದಿ ಗೌರವಿಸುತಿಹುದೆ ಮಾರ್ಗವು ಮಹಿಳೇ ॥ ೩೨ ॥

ಅರಿಯದರಾಡಿದರದರಿಂ ।
ಬರುವುದೆ ಕುಂದೆ? ದನುಮರೆದು ಪ್ರೀತಿಯೊಳವರಂ ॥
ಬೆರೆದುಪಚರಿಸಲು ನಿನ್ನೊಳು ।
ನೆರೆವರು ಪರಮಾರ್ಥವಿದನು ಪರಿಕಿಸು ಮಹಿಳೇ ॥ ೩೩ ॥

ಕೋಪವನಣಗಿಸು ಸೊಗಸಿನ ।
ತಾಪವನಾಭರಣ ತೃಷ್ಣೆಯದ ಪರಿಹರಿಸೌ ॥
ಶಾಪಿಸದಿರು ಪತಿಗೃಹಮಂ ।
ನೀಂ ಪಡೆಯುವೆ ಶಾಂತಿಸೌಖ್ಯಗಳನೆಲೆ ಮಹಿಳೇ ॥ ೩೪ ॥

ಅತಿಯಾಹಾರವ ನಿದ್ರೆಯ ।
ನತಿಭಾಷಣ ದುಂದು ವೆಚ್ಚಗಳ ಮೇಣ್ಪರರೋಳ್ ॥
ಅತಿಸ್ನೇಹಂಗಳ ಗೈದಪು ।
ದತಿದುಃಖಕೆ ಮಾರ್ಗವಹುದು ಗಮನಿಸು ಮಹಿಳೇ ॥ ೩೫ ॥

ಬೀದಿಯ ಬಾಗಿಲೊಳಾವಗು ।
ಮಾದಿತ್ಯನ ಪುಟ್ಟಿನಲ್ಲಿ ಪಾಸಿನೊಳುಂ ಮೇ ॥
ಣ್ಮಾಡುವರ ಜತೆಯಲುಂ ಬಹು ।
ನೋಡದಲಿರೆ ಸಲ್ಲದರಿಯುದನು ನೀಂ ಮಹಿಳೇ ॥ ೩೬ ॥

ದಂಭವ ಗೈವರ ಭವದಾ ॥
ಗುಂಭವ ಬಯಲಾಗಿಸುವರ ಸ್ವೈರಿಣಿಯರನುಂ ॥
ಅಂಬರ ಭೂಷಣಗಳನುಂ ।
ನಂಬದಲಾರ್ಯರನು ನೋಡಿ ನಡೆಯೆಲೆ ಮಹಿಳೇ ॥ ೩೭ ॥

ಪ್ರಾಣಿಗಳೊಳು ಕನಿಕರಮಂ ।
ಕ್ಷೋಣಿಯಲುಳ್ಳಖಿಳ ಜೀವರಾಶಿಗೆ ಹಿತಮಂ ॥
ಮಾನವ ಕುಲಕತಿ ಸೌಖ್ಯವ ।
ಮಾನಸದಲಿ ಕೋರುತಿಹುದು ಧರ್ಮವು ಮಹಿಳೇ ॥ ೩೮ ॥

ಪತಿ ತಾಂ ಮೃತಿಯೊಂದಿರೆ ಮೇ ।
ಣ್ಗತಿಗಾಣದಲಲೆದು ದುಷ್ಟಸಂಘಗೆ ಬಾಯ್ಗಾ ॥
ಹುತಿಯಾಗುವ ಸತಿಯರ ನೀಂ ।
ಹಿತದೊಳು ಪೋಷಿಪುದು ಧರ್ಮವಲ್ಲವೆ? ಮಹಿಳೇ ॥ ೩೯ ॥

ಪಿರಿಯರ ನುಡಿಯಂಗಣಿಸದೆ ।
ಪರಗೃಹ ಪರಸಂಗಗಳಿಗೆ ಬೆದರದೆ ನಡೆವಾ ॥
ತರುಣಿಯು ನಿಂದೆಯುಪೊಂದು ।
ತ್ತಿರೆಯುನ ಕೋಪಕ್ಕೆ ಪಾತ್ರಳಹಳರಿ ಮಹಿಳೇ ॥ ೪೦ ॥

"ನನ್ನಂ ರೂಪದಿ ಗೆಲ್ವವ।
ರಿನ್ನಿಲ್ಲಂ" ಎಂದು ಬೀಗಿ ಬೆರೆಯಲ್ಬೇಡಾ॥
ಮುನ್ನುಂ ಇನ್ನುಂ ಜಗದೊಳು।
ಸನ್ನುತರೂಪಿಗಳು ಸ್ತ್ರೀಯರಿಹರೆಲೆ ಮಹಿಳೇ ॥ ೪೧ ॥

ಗುರುಹಿರಿಯುರನನುಸರಿಸುತ।
ಲೆರೆಯನು ಸಾಕ್ಷಾತು ಪರಮ ಪುರುಷನೆ ದಿಟಮೆಂ॥
ದರಿತಿರುವಾ ತರುಣೀಮಣಿ॥
ಯರಿಯುಳು ಕಷ್ಟಗಳನೊಂದುಮಂ ತಿಳಿ ಮಹಿಳೇ ॥ ೪೨ ॥

ಪರಪುರುಷನು ಸೋದರಮೇ।
ಣ್ಪರವಸ್ತುವು ಲೋಷ್ಟಮೆಂದು ಪರಿಗಣಿಸುತಲಾ॥
ಪರವಿಷಯ ಚಿಂತನೆಯನುಳಿ।
ದಿರುತಿರುವಾ ತರುಣಿ ಜಗದಿ ದಿವಿಜಳು ಮಹಿಳೇ ॥ ೪೩ ॥

ಅತಿಯುಣಿಸುಗಳನ್ನೀಯದೆ।
ಯತಿಮುದ್ದಿಸಿ ಮೂಢತನವ ಪೆರ್ಚಿಸದಲೆ ಮುಂ॥
ದತಿ ಸೊಬಗಿಂ ಬಾಳುತ ಪರ।
ಹಿತಮಂಗೈಯ್ವಂತೆ ಪುತ್ರರಂ ಪೊರೆ ಮಹಿಳೇ ॥ ೪೪ ॥

ಮನೆಗೆಲಸಗಳಂ ಕಲಿಸದೆ।
ಘನಪ್ರೀತಿಯೊಳುಣಿಸಿ ಮಂಕುತನವನು ಕಲಿಸಲ್॥
ಕನಲುವರು ಪತಿಯಗೃಹದೊಳು।
ನೆನೆಯಿದ, ಬಾಲೆಯರ ತಿದ್ದು ನಯದೊಳು, ಮಹಿಳೇ॥ ೪೫ ॥

ಪಿರಿಯರ್ಗೊಂದಿಸುವುದನುಂ ।
ಕಿರಿಯರ ಮನ್ನಿಸುತ ನಾಣ್ನುಡಿಗಳೊರೆವುದನುಂ ॥
ಪೆರರಂ ಗೌರವಿಪುದನುಂ ।
ಕಿರಿತನದೊಳ್ ಕಲಿಸು ಬಾಲೆಯರ್ಗಲೆ ಮಹಿಳೇ ॥ ೪೬ ॥

ಸವತಿಯರ ಮಕ್ಕಳಿಂದೆನು ।
ತವಮಾನವ ಗೊಳಿಸಿ, ಹಿಂಸಿಸುತ ನಿಷ್ಠುರದಿಂ ॥
ಭವಣೆ ಗೊಳಿಸುವುದು ಸಲ್ಲದು ।
ತವೆ ಪ್ರೀತಿಸಿ ಕಾವುದಾತ್ಮಜರವೋಲ್ ಮಹಿಳೇ ॥ ೪೭ ॥

ಮಕ್ಕಳ ಬೈವುದು ಸಲ್ಲದು ।
ಚಿಕ್ಕವರರಿವಂತೆ ದುಷ್ಟನುಡಿಗಳ ನುಡಿಯಲ್ ॥
ಗಕ್ಕನೆ ತಾವನುಕರಿಪರು ।
ನಿಕ್ಕವದಿಂ ಗಮನಿಸಿದನು, ಮರೆಯದೆ ಮಹಿಳೇ ॥ ೪೮ ॥

ಪರಕೀಯರ ಮೇಲ್ಕೋಪಿಸಿ ।
ಪರಿಹಾರವ ಕಾಣಲರಿಯದೆಳೆ ವಸುಳೆಗಳಂ ॥
ಪರಿಪರಿ ಬಾಧಿಸೆ ಫಲಮೇಂ? ।
ಅರಿವುಳ್ಳರ ರೀತಿಯಲ್ಲವದು ತಿಳಿ ಮಹಿಳೇ ॥ ೪೯ ॥

ಮಾತೆಯ ಗುಣದೋಷಗಳುಂ ।
ನೀತಿಯು ದುಶ್ಚರಿತೆ ದುರ್ವಿಷಯ ಚಿಂತೆಗಳುಂ ॥
ಮಾತುಂ ಸದ್ಗುಣಗಣಮುಂ ।
ತಾಂ ತಪ್ಪದೆ ಬರ್ಪುವೆಳೆಯರಿಗೆ ದಿಟ ಮಹಿಳೇ ॥ ೫೦ ॥

ತೊತ್ತುಗಳೊಡವೆರೆದಿರ್ಪುದು ।
ಉತ್ತಮವನಿತೆಯರ ವರ್ಗಕತಿಹೀನವು ಕೇಳ್ ॥
ಮತ್ತಂ, ಅಸಹ್ಯ ಭಾಷೆಯ ।
ನುತ್ತಮರಾಡುವುದು ಸಲ್ಲದಿಡನರಿ ಮಹಿಳೇ ॥ ೫೧ ॥

ಸಿರಿಯೇ ಸುಸ್ಥಿರವೆನ್ನು ।
ತ್ತರಿಯದೆ ಪರಕಷ್ಟದುಃಖ ಸಂಕಟಗಳನಂ ॥
ಪರಿಪರಿ ವಿಧದೊಳ್ ಚರಿಯುವ ।
ತರುಣಿಯು ತಾ ನಿಳಿಯುತಿಹಳು ನರಕಕೆ ಮಹಿಳೇ ॥ ೫೨ ॥



ಗುಣವತಿ, ಪತಿಭಕ್ತಿಯೊಳ ।
ಗ್ರಣಿ, ಕಡು ಕಷ್ಟಗಳ ಪಡುವರಂ ಪೋಷಿಸೆ ತಾಂ ॥
ಎಣೆಯಿಲ್ಲ ವಿವಳಿಗೆಂದೆನೆ ।
ಗುಣಮಣಿ ಯಾ ತರುಣಿ ಯಿರವೆ ಧನ್ಯವು ಮಹಿಳೇ ॥ ೫೩ ॥

ಪತಿಯು ಬಂಧುಗಳ ನೀನತಿ ।
ಹಿತದಿಂ ಕಾಣುವುದು ವಿಹಿತವೆಂದುಂ ತಿಳಿಯೌ ॥
ಸತತಂ, ನಿನ್ನವರುಗಳಂ ।
ಮತಿಯಿಂ ಪಕ್ಷದಲಿ ನೋಡೆ ಸಲ್ಲದು ಮಹಿಳೇ ॥ ೫೪ ॥

ಕಿರಿಪ್ರಾಯದಿ ತಂದೆಯ ಮ ।
ತ್ತರೆಯುನ ನಡುಪ್ರಾಯದಲ್ಲಿ, ವಾರ್ಧಿಕ್ಯದಿ ಪು ॥
ತ್ರರನನುಸರಿಪುದು ನಾರಿಗೆ ।
ತರುವುದು ಸುಖಸಂಪದಂಗಳಂ ತಿಳಿ ಮಹಿಳೇ ॥ ೫೫ ॥

ಪತಿಕಾರ್ಯದಿ ದಾಸಿಯುಂ ಮೇ |
ಣ್ಪತಿ ಶಯ್ಯದಿರಂಭೆ, ಮಂತ್ರಿಯಾಲೋಚನೆಯೊಳ್ ||
ಸತತಂ ಪೋಷಿಪ ಪರಿಯೊಳ್ |
ಹಿತಕರಿ ಮಾತೆಯನೆ ಪೋಲ್ವಳೆಂದುಂ ಮಹಿಳೇ || ೫೬ ||

ಸ್ತ್ರೀಯಳೆ ಜಗದುತ್ಪತ್ತಿಗು |
ಸ್ತ್ರೀಯಳೆ ಸ್ಥಿತಿ ನಾಶಗಳಿಗು ಕಾರಣಮದರಿಂ ||
ಸ್ತ್ರೀಯಳ ಸ್ಥಿತಿಯದೆ ಲೋಕದ |
ನ್ಯಾಯುವ ರೂಪಿಸುತಲಿಹುದು, ನಿಜವಿದು ಮಹಿಳೇ || ೫೭ ||

ವರ ಬ್ರಹ್ಮಜ್ಞಾನಿಗಳುಂ |
ನರವರರಿಳೆಯಾಣ್ಮರುಂ ಸುಯೋಗಿಗಳುಂ ಮೇಣ್ ||
ತಿರೆಯಖಿಳ ಚರಾಚರಮುಂ |
ಧರೆಯೊಳ್ ಸ್ತ್ರೀಶಕ್ತಿಯಿಂದಲುದಿಪುವು ಮಹಿಳೇ || ೫೮ ||

ಮನೆಯುಂ ವಿದ್ಯೆಯ ಸಿರಿಯುಂ |
ಘನತೆಯು ಪದವಿಗಳ ರಾಜಸೇವಾದಿಗಳಂ ||
ಮನುಜಂ ಪಡೆವುದು ತನ್ನಯ |
ಇನಿಯಳ ಮೆಚ್ಚಿಪುದಕೋಸುಗವೆ ದಿಟ ಮಹಿಳೇ || ೫೯ ||

ಮಗನಾದರೆ ಪೆರತೇನ್ಮೇ |
ಣ್ಮಗಳಾದರೆ ಕುಂದದೇನು ಜಗವ್ಯಾಪಾರಂ ||
ಮಗಮಗಳುಭಯರಸ್ಥಿತಿಯಿಂ |
ಸೊಗಯಿಪುದಿದನರಿದು ನಡೆಯುವೇಳ್ಕುಂ ಮಹಿಳೇ || ೬೦ ||

ಅಬಲೆಯು ಸುನೀತಿ ಮಾರ್ಗದೊ ।
ಳಭಿವೃದ್ಧಿಯ ಗೈಸದಿರುವ ಪಡೆದವರವಳಂ ॥
ಪ್ರಭು ಪತಿಯಗೃಹಕೆ ನೂಂಕುವು ।
ದಭವಕೆ ತಾಂ ಮಾರ್ಗವಹುದು ಜಗದೊಳು ಮಹಿಳೇ ॥೬೧॥

ತಂದೆ ಬರ ತಾಯಿ ಬಾರಳು ।
ಬಂಧುವು ಸಹಜಾತರಾರು ಬಾರರು ಸತಿಯಾ ॥
ಬಂಧನಕುಂ ಮೋಕ್ಷವೈಭವಕು ।
ಸಂದೇಹವಕಾಣೆ ಪತಿಯೆ ಕರ್ತೃವು ಮಹಿಳೇ ॥ ೬೨ ॥

ಪತಿಯೇ ಗತಿ ಪತಿಯೇ ಮತಿ ।
ಪತಿಯೇ ಹಿತದಾತ ತನ್ನ ಕಾವವನೆನುತಂ ॥
ಪತಿಪಾದಯುಗಳವನಿಶಂ ।
ಸತಿತಾಂ ಮರೆಯದಲೆ ನೆನೆಯ ವೇಳ್ಕುಂ ಮಹಿಳೇ ॥ ೬೩ ॥

ಯಾರಿದ್ದೊಡೇನು ಸತಿಯಳ ।
ದಾರಿದ್ರ್ಯವನೊಮ್ಮೆ ನೀಗಿಸಲ್ಬರ್ಕುಂ ಮೇಣ್ ॥
ಸಾರಸುಖವೀವ ಗೃಹಿಣೀ ।
ಕಾರ್ಯವ ಪತಿಯಲ್ಲದಾರು ಕುಡುವರು ಮಹಿಳೇ ॥ ೬೪ ॥

ಮಾತಾಪಿತೃಗಳ ತೊರೆಯುತ ।
ಭ್ರಾತರನೀಕ್ಷಿಸುವ ಮಾರ್ಗವರಿಯದೆ ಭಗಿನೀ ॥
ವ್ರಾತವ ಬಿಟ್ಟೈತಂದಿಹ, ।
ಪ್ರೀತಿಯೊಳವರನ್ನು ಕಾಣು, ಸೊಸೆಯರ ಮಹಿಳೇ ॥೬೫॥

ತುರು-ಕರುಗಳ ಮಂದೆಗಳಂ ।
ಪಿರಿಯರ ತೊರೆದಿಳೆಯೊಳೊರಗಿ ನರಳುವ ಶಿಶುವಂ ॥
ವರಹೀನೆಯ ವಿಧವೆಯನುಂ ।
ಮರುಕದಿ ಪೋಷಿಪುದು ಧರ್ಮವಲ್ಲವೆ? ಮಹಿಳೇ ॥ ೬೬ ॥

ವಿಧವೆಯರ ತಂಡಗಳು ಮುಂ ।
ದದುಭುತದಲಿ ತೋರುತಿರಲು ಹಾಹಾಕಾರಂ ॥
ಬಿದಿಯನು ಮರುಗಿಸುತಿರಲಾ ।
ಸದನದಿ ಮಂಗಳವ ಕಾಣಲಹುದೇಂ? ಮಹಿಳೇ ॥ ೬೭ ॥

ತಾವನುಭವಿಸಿದ ಕಷ್ಟದ ।
ನೋವನು ಮರೆಯುವರು ಮನೆಗೆ ಸೊಸೆಯೈದಲು ಮುಂ ॥
ದೇವಿಧದಿ ಕಾವುದೆಂಬುದ ।
ಭಾವಿಸದಿಹ ರಿಳೆಯೊಳಿದರಿನರಿದೇಂ? ಮಹಿಳೇ ॥ ೬೮ ॥

ಬರೆದೋದುತಿಹುದು ದೋಷವೆ? ।
ಪರಿಪರಿ ವಿದ್ಯೆಗಳ ನರಿಯುತಿಹುದೇಂ ಬರಿದೇ ॥
ಸಿರಿಯರಸನ ಪಾಡಲು ತಾವ್ ।
ವರಸಂಗೀತವನು ಕಲಿಯೆ ದುರಿತವೆ? ಮಹಿಳೇ ॥ ೬೯ ॥

ಗುಣಮಂ ಧರಿಪಿಪರಲ್ಲದೆ ।
ಎಣಿಸರು ಬಂಗಾರರತ್ನಭೂಷಣಗಳ ಮೇಣ್ ॥
ಕ್ಷಣಿಕವು ಸಂಪದಮಾ ಸ ।
ದ್ಗುಣ ಮೆರೆವುದನಂತಕಾಲ ಮರಿಯಿದ ಮಹಿಳೇ ॥ ೭೦ ॥

ಪಿತನಾಗಲಿ ಹಿತನಾಗಲಿ।
ಅತಿಪ್ರೀತಿಯ ತೋರ್ಪ ಭ್ರಾತನಾಗಲಿ ಸತಿತಾಂ॥
ಪತಿಯನು ಬಿಟ್ಟನ್ಯರ ಬಳಿ।
ಯತಿಸಲುಗೆಯ ತೋರೆ ನಿಂದೆಗಾಕರ ಮಹಿಳೇ ॥ ೭೧ ॥

ಪರಪುರುಷರ ನಾದರಿಪಾ।
ಪರಿಯಿದೊರ್ಡೆ ಭರ್ತನೊಡವೆರೆದು ನೀಂಚರಿಸಾ॥
ಬರುವುದು ಸ್ವರ್ಗವೊ ನರಕವೊ।
ತರುಣೀಮಣಿ ಚಿಂತೆಬೇಡ ವೆಚ್ಚರ ಮಹಿಳೇ ॥ ೭೨ ॥

ನುಡಿಯದ ನಯಗೊಳಿಸೌ ಸ।
ನ್ನಡೆಯೊಳ್ ಪರಕೀಯರರಿದುಕೊಳ್ಳುಲು ನಡೆಯೌ॥
ಒಡೆಯನ ಮೆಚ್ಚಿಸಿ ಬಾಳೌ।
ಪಡೆಯೌ ನೀ ನಾತ್ಮಸುಖವ ಜಗದೊಳು ಮಹಿಳೇ ॥ ೭೩ ॥

ಪೂರ್ವಾಚಾರವನೀಗುತ॥
ಚಾರ್ವಾಕರನೋಡಿ, ನಾಗರೀಕತೆಯೆನ್ನು॥
ತ್ತುರ್ವೀ ಭಾರಕರಪ್ಪುದು।
ಪೌರ್ವಾತ್ಯರಿಗೆಂದು ಮಲ್ಲ ಸಲ್ಲದು ಮಹಿಳೇ ॥ ೭೪ ॥

ಸಂಕಟಸಮಯದೊಳುಂ ನಿ।
ಶ್ಯಂಕೆಯೊಳಾ ಧೀರ ರಹುದು! ಭಲೆ! ದಿಟವೆನ್ನಲ್॥
ಬಿಂಕದಿ ಪಾತಿವ್ರತ್ಯವ।
ತಾಂ ಕಾಯ್ದುವರುಂಟು ನಮ್ಮ ನಾಡೊಳು ಮಹಿಳೇ ॥ ೭೫ ॥

ಕಡುಬಡತನದೊಳು ನೊಂದುಂ ।
ಒಡವೆಯು ಬಾಧೆಯನೆ ಸಹಿಸಿ ಮಹಿಯೋಳ್ಪರರಾ ॥
ಅಡಿಗಾಳಾಗಿಯು ಪುರುಷಂ ।
ಪಿಡಿದಿರ್ದಪನಸುವ ನಜ್ಜರಿಯ ಕೇಳ್ಮಹಿಳೇ ॥ ೭೬ ॥

ಧನವಂತರಹರ ಹೆರವರ ।
ಘನವಹ ವೈಭವವ ನೋಡಿ ಮರುಳಾದೊಡಮೇಂ? ॥
ಧನಮೇಂ ಸುಲಭದಿ ಬರ್ಪುದೆ? ।
ಮನಕತ್ಯಾಯಾಸವೀವುದರಿಯಿದ ಮಹಿಳೇ ॥ ೭೭ ॥

ವರದಕ್ಷಿಣೆಗಾಶಿಸುತಲಿ ।
ಪರಿಪರಿ ಕಿರುಕುಳಗಳಿಂದ ನೋಯಿಸಿ ಪರರಂ ॥
ಚರಿವುದು ಸಲ್ಲದು ಲೋಕದಿ ।
ವರನುತ್ತಮ ಭಾರ್ಯೆಯನ್ನು ವರಿಸಲಿ ಮಹಿಳೇ ॥ ೭೮ ॥

ಪೆಣ್ಣಂ ಪಡೆವುದು ಲೋಕದಿ ।
ಪುಣ್ಯವಗಳಿಸುವುದಕಲ್ಲ ದಶ್ಯಾಶೆಯೊಳಾ ॥
ಕನ್ಯಾವಿಕ್ರಯಕಲ್ಲವು ।
ಕನ್ಯಾದಾನದೊಳು ಸುಕೃತವಂಪಡೆ ಮಹಿಳೇ ॥ ೭೯ ॥

ಧನಮೇ ಪಿರಿದೆಂದೆಣಿಸುತ ।
ಜನರತ್ಯಾಚಾರದಿಂದ ಕನ್ಯೆಯ ಕುಡುವರ್ ॥
ಘನತೆಯನರಿಯದ ಮನುಜಂ ।
ಧನಮಂ ಪಾಳ್ಗೊಳಿಪನೆಂಬುದರಿಯರು ಮಹಿಳೇ ॥ ೮೦ ॥

ಸಿರಿಯಂ ಮೋಹಿಸಿ ಕೆಲಬರು ।
ವರನವಗುಣಗನು ಲೆಕ್ಕಿಸದೆ ಕುವರಿಯರಾ ॥
ಕೊರಳಂಕೊಯ್ವರು ಲೋಕದಿ ।
ಪಿರಿಯುಪರಾಧವನು ಕಾಣಲಿರ್ಪುದೆ? ಮಹಿಳೇ ॥ ೮೧ ॥

ಸಿರಿಯಿದ್ದರೇನು, ಚಿನ್ನದ ।
ಸರಿಗೆಯ ನೀನಿಟ್ಟರೇನು, ಬಾಳ್ವಿಗೆ ಪಥಮಂ ॥
ಅರಿಯದೆ ಪ್ರಾಣವ ತೊರೆಯುವ ।
ವರಭಾರತ ಪುತ್ರರಿರವನರಿಯುದೆ ಮಹಿಳೇ ॥ ೮೨ ॥

ಸಿರಿಗೆ ತೌರೂರು ವಿದ್ಯೆಗೆ ।
ಗುರುಪೀಠವು ಲೋಕಹಿತವಗ್ರವರನೆಲೆವೀ ॥
ಡರಿವುಳ್ಳರ ನೆಲೆಯೆನಿಸಿದ ।
ಸಿರಿಭಾರತಿಯಿರವ ನೋಡು ಲಕ್ಷ್ಯದಿ ಮಹಿಳೇ ॥ ೮೩ ॥

ಸತ್ಯಕೆ ಧರ್ಮಕೆ ಜ್ಞಾನಕೆ ।
ಅತ್ಯಂತಾಚಾರ ವಿಭವ ಗೌರವಗಳಿಗುಂ ॥
ನಿತ್ಯಾನಿತ್ಯ ವಿವೇಕಕೆ ।
ಮುತ್ತೆನಿಸಿದ ಭಾರತಿಯನೆ ಪರಿಕಿಸು ಮಹಿಳೇ ॥ ೮೪ ॥

ಪಾತಿವ್ರತ್ಯದಿ ಲೋಕಕೆ ।
ನೀತಿಯ ಜ್ಞಾನವನು ವಿವಿಧ ಮಹಿಮೆಗಳನು ಮರ್ ॥
ಖ್ಯಾತರು ತೋರಿದರವರಾ ।
ಖ್ಯಾತಿಯ ಪೋಗೊಳಿಸೆ ಸಲ್ಲದರಿಯಿದ ಮಹಿಳೇ ॥ ೮೫ ॥

ಸಿರಿಯನು ವೈಭವನುಂ ಮೇ ।
ಶ್ವರ ಸೌಖ್ಯವ ರಾಜಭೋಗಗಳ ತೊರೆಯುತಲಾ ॥
ಹಿರಿಯನಗಸ್ತ್ಯನ ವರಿಸಿದ ।
ವರಲೋಪಾಮುದ್ರೆಯುವಳ ಪರಿಕಿಸು ಮಹಿಳೇ ॥ ೮೬ ॥

ಹರಿವರುಣ ಧರ್ಮರಾಜರ ।
ತೊರೆಯುತ ಮಾನಸದಿ ವರಿಸಿದಾತನೆ ಪತಿಯೆಂ ॥
ದುರುತರ ಪಾತಿವ್ರತ್ಯದಿ ।
ಮೆರೆದಾ ದಮಯಂತಿಯುವಳ ಪರಿಕಿಸು ಮಹಿಳೇ ॥ ೮೭ ॥

ಕಾಡಿನ ಕಷ್ಟವಗಣಿಸದೆ ।
ಬೀಡಿಲ್ಲದ ದುಃಖವದನು ಪರಿಗಣಿಸದಲಾ ॥
ಮೂಡಿದ ಪತಿಭಕ್ತಿಯೊಳಾ ।
ಕಾಡಿಗೆ ಗಮಿಸಿದಳ ಸೀತೆಯಂತಿರು ಮಹಿಳೇ ॥ ೮೮ ॥

ಸಾವವನೆಂದರಿದಿರ್ದುಂ ।
ಭಾವದಿ ಧೈರ್ಯವನೆ ತಾಳ್ದು ಮರುಗದಲಿನನಂ ॥
ಸಾವಿಂ ಕಾಯ್ದುಳುಹಿದಳಾ ।
ಸಾವಿತ್ರಿಯ ಪೋಲ್ದರಿಹರೆ ಧರೆಯೊಳು ಮಹಿಳೇ ॥ ೮೯ ॥

ಚಂಡಪರಾಕ್ರಮರಿರ್ದುಂ ।
ಭಂಡರವಶಳಾಗಿ ನೊಂದು ಭಂಗವ ನಾಂತುಂ ॥
ತುಂಡರಿಸಿದ ಶತ್ರುಗಳಾ ।
ಚಂಡಿಯ ಪಾಂಚಾಲಿಯನ್ನು ಧ್ಯಾನಿಸು ಮಹಿಳೇ ॥ ೯೦ ॥

ಹರಿಹರಬ್ರಹ್ಮಾದಿಗಳಂ।
ವರ ಪಾತಿವ್ರತ್ಯ ಮಹಿಮೆಯಿಂದಲಿ ಗೆಲ್ದಾ ॥
ತರಣೀಮಣಿಯನಸೂಯೆಯ।
ಮರೆಯದಿರಾ ಕೀರ್ತಿವಡೆವೆ ಜಗದೊಳು ಮಹಿಳೇ ॥೯೧॥

ಪರಮೈಶ್ವರ್ಯವ ತೊರೆಯುತ।
ಪರಿಪರಿಯಾಯಾಸಗಳನು ಪರಿಗಣಿಸದಲಾ ॥
ವರನಡಿಗಳ ನೆರೆನಂಬಿದ।
ತರುಣೀಮಣಿ ಚಂದ್ರಮತಿಯ ಧ್ಯಾನಿಸು ಮಹಿಳೇ ॥ ೯೨ ॥

ಪತಿತಾಂ ಮೃತಿಯಾಂತಿರಲಾ।
ಗತಿಧೈರ್ಯವನೊಂದಿ ಪಂಚ ಪುತ್ರರ್ಕಳ ಮರ್ಕ ॥
ಕ್ಷಿತಿಯೊಳ್ ವೃದ್ಧಿಯ ಗೈಸಿದ।
ಸತಿಕುಂತಿಯ ಪೋಲ್ದರಿಹರೆ? ಗಮನಿಸು ಮಹಿಳೇ ॥ ೯೩ ॥

ಗಂಡುಗಲಿಯಂತೆ ರಣದೊಳು।
ಪುಂಡರನಡಗಿಸಲು ಪೊರಟು ಪತಿಯೊಂದಿಗೆ ಮರ್ಕ ॥
ಗಂಡನಕಾಯ್ದಾ ಪತಿವ್ರತೆ।
ಕಂಡರಿಯಾ! ಸತ್ಯಭಾಮೆ ಚರಿತವ ಮಹಿಳೇ ॥ ೯೪ ॥

ನಾರೀಮಣಿ ಲಕ್ಷ್ಮಿಯನುಂ।
ಶಾರದೆಯಂ ಪಾರ್ವತಿಯನು ಪಾತಿವ್ರತ್ಯಂ ॥
ಮೀರೆ ಜಯಿಸಿದಳ ಪೂಜ್ಯೆಯ।
ನಾರಿಯರುಂಧತಿಯ ಮರೆಯದಿರು ತಿಳಿ ಮಹಿಳೇ ॥ ೯೫ ॥

ಮಾನಸದೊಳು ವರಿಸಿದನೇ ।
ತಾನಧಿಪತಿಯೆಂದು ನಂಬಿ ಚತುರತೆಯಿಂ ಮರ್ಜ ।
ಶ್ರೀನಾಥನ ಪಡೆದವಳಾ ।
ಮಾನಿನಿ ರುಕ್ಮಿಣಿಯು ಧ್ಯಾನಿಸನುದಿನ ಮಹಿಳೇ ॥ ೯೬ ॥

ಮಹಿಳಾ ಸುನೀತಿ ಶತಕವ ।
ಮಹಿಳಾ ರತ್ನಗಳು ಪಠಿಸಿ ಸಂತಸದಿಂ ತಾ ॥
ವಿಹದೊಳ್ನಡೆಯೊಳ್ಬೆರೆಯಿಸೆ ।
ಇಹಪರಮಂ ಪಡೆವುದರಿದೆ? ಯೋಚಿಸು ಮಹಿಳೇ ॥ ೯೭ ॥

ಧರೆಯೊಳ್ಪೆಂಗಳ ಧರ್ಮವ ।
ನೊರೆದೆನು ಕನ್ನಡದಿ ಪರಮ ಪುರುಷನ ಕೃಪೆಯಿಂ ॥
ಪಿರಿಯರು ತಪ್ಪನು ಮನ್ನಿಸಿ ।
ನೆರೆಗುಣಗಳ ಭೂಷಿಸಲ್ಕೆ ನಿರುತದಿ ಮಹಿಳೇ ॥ ೯೮ ॥

ಸಿರಿಯರಸನ ಕರುಣೆಯು ಮೇ ।
ಣ್ಗುರುವರ್ಯರ ಪ್ರೀತಿ ಪೂರ್ವಕಾಶೀರ್ವಾದಂ ॥
ಅರಿವುಳ್ಳರ ದಯೆಯುಂ ತಾಂ ।
ಬೆರೆಯಲ್ಕಾನೊರೆದೆ ಶತಕವನ್ನಿದ ಮಹಿಳೇ ॥ ೯೯ ॥

ಸುಳಿಬಿಳಿಗಳಕ್ಕೆ ಧಾತ್ರಿಯೊ ।
ಳೆಳೆಯರು ಪಿರಿಯರ್ಗೆ ತಾಗಿ ಬಾಗುತ ನಡೆಯೊಳ್ ॥
ಕಳವಳವ ತೊರೆದು ಬಾಳುಗೆ ।
ನಿಳಯಂಗಳು ವೃದ್ಧಿಗೊಳ್ಗೆ ನಿರುತವು ಮಹಿಳೇ ॥ ೧೦೦ ॥



# ಶ್ರೀಮತಿ ಎಚ್. ಸರಸ್ವತಮ್ಮನವರು.

## ಮುಖ್ಯೋಪಾಧ್ಯಾಯಿನಿ, ಗೌರ್ನಮೆಂಟ್ ಗರ್ಲ್ಸ್ ಸ್ಕೂಲ್, ಚನ್ನಪಟ್ಟಣ.

……………ಕನ್ನಡಿಗ ಬಾಲಕ ಬಾಲಿಕೆಯರ ಹಸ್ತಗಳನ್ನು ಮಾಸ ಮಾಸಕ್ಕೂ ಅಲಂಕರಿಸುತ್ತಿರುವ ಗ್ರಂಥಮಾಲಾ ಕುಸುಮಗಳ ಪರಿಮಳವು, ನಮ್ಮವರ ದುಶ್ಚೇಷ್ಟೆ, ದುರಾಚಾರ, ದುರ್ಗುಣಪುಂಜದ ದುರ್ವಾಸನೆಯನ್ನು ದೂರಮಾಡಿ, ಸತ್ಯಸನಾತನ ಸದಾಚಾರ ಸನ್ಮಾರ್ಗ ಪಾತಿವ್ರತ್ಯಾದಿ ಸದ್ಗುಣ ಸಮೂಹದ ಸುವಾಸನೆಯನ್ನು ಪ್ರಚುರಗೊಳಿಸುತ್ತಿರುವುದು. ಅಲ್ಲದೆ ಆರ್ಯ(ಕರ್ಣಾಟಕ)ಮಹಿಳೆಯರ ಗರ್ಭಾಂಬುಧಿಯಲ್ಲಿ ಸೀತಾ, ಸಾವಿತ್ರಿ, ದಮಯಂತಿ ಮುಂತಾದ ಪುತ್ರಿಕಾರತ್ನಗಳೂ, ಹರಿಶ್ಚಂದ್ರ, ದಧೀಚಿ, ಯುಧಿಷ್ಠಿರ, ಅರ್ಜುನ, ಅಭಿಮನ್ಯು ಮುಂತಾದ ಶೂರ ಧೀರ ಉದಾರ ದೇಶಹಿತೈಷಿಗಳಿಗೆ ಸಮಾನರಾದ ಪುತ್ರರೂ ಉದ್ಭವಿಸಿ, ಪವಿತ್ರ ಭಾರತೀಯ ಪ್ರಾಚೀನ ಪ್ರಾಶಸ್ತ್ಯವನ್ನು ಪ್ರಜ್ವಲಿಸುವಂತೆ ಮಾಡಬೇಕಾದರೆ, ಪ್ರತಿ ಕರ್ಣಾಟಕ ಗೃಹಿಣೀ ಗೃಹಸ್ಥನೂ ಗ್ರಂಥಮಾಲಾ ಕುಸುಮಗಳಲ್ಲಿನ ಭಾವಗರ್ಭಿತಗಳಾದ ನವ ಮಕರಂದಸಾರವನ್ನು ಪಾನಮಾಡಿ ತೀರಬೇಕು……………

……ಬಾಲಕ ಬಾಲಿಕೆಯರ ನಿರ್ಮಲ ಮನೋವೃತ್ತಿಯನ್ನು ಸತ್ಪಥ ಸದಾಚಾರಕ್ಕೆಳೆಯುವ ಗ್ರಂಥಮಾಲಾ ಕುಸುಮಗಳ ಮೃದುಮಧುರ ಭಾಷಾವಿಶೇಷವು ಆಕರ್ಷಕವೂ ಅಸಾಮಾನ್ಯವೂ ಆಗಿದೆ. ಮಾತೃದೇಶಾಭಿಮಾನ ಮಾರ್ಗಗಳೂ, ಪಾತಿವ್ರತ್ಯ ಧರ್ಮನೀತಿಗಳೂ, ಭಕ್ತಿ ಜ್ಞಾನ ವೈರಾಗ್ಯರಹಸ್ಯಗಳೂ, ಸತ್ಸಂತಾನೋತ್ಪತ್ತಿಯ ಮಾರ್ಗಗಳೂ ಇವುಗಳನ್ನು ಉಚಿತ ರೀತಿಯಿಂದ ಬೋಧಿಸುತ್ತಾ……………
ಸಾವಿರ ಮಾತೇಕೆ, ನವಯುಗಪ್ರಾರಂಭೋತ್ಸವಕ್ಕೆ ಮಾಡುತ್ತಿರುವ ಸಂಘ ಸಂಸ್ಕಾರಕ್ಕೆ ನೂತನ ವಿಷಯಪೂರಿತವಾಗಿ ಸುಸ್ವಾಗತ ಸೂಚಕವಾದ ಪುಷ್ಪತೋರಣಪತಾಕೆಗಳಂತೆ ಪ್ರಕಾಶಿಸುತ್ತಿರುವ ಭಗವದೀಯ ಗ್ರಂಥಮಾಲಾ ಕುಸುಮಗಳನ್ನು ಪ್ರತಿಯೊಬ್ಬ ಕರ್ಣಾಟಕರೂ ಲಕ್ಷ್ಯವಿಟ್ಟು ಸಂಗ್ರಹಿಸಬೇಕೆಂಬುದೇ ನನ್ನ ಪ್ರಾರ್ಥನೆ.

ನಾನು Moral losson period ಧರ್ಮನೀತಿಬೋಧೆಯ ಕಾಲಗಳಲ್ಲಿ ಗ್ರಂಥಮಾಲಾ ಪುಸ್ತಕಗಳನ್ನೇ ಉಪಯೋಗಿಸುತ್ತಿದ್ದೇನೆ. ಮತ್ತು ನನ್ನ ಪರಿಚಯಕ್ಕೆ ಬಂದ ಬಾಲಿಕೆಯರ ಮತ್ತು ಅನೇಕ ಸ್ತ್ರೀಯರ ವಿರಾಮಕಾಲಗಳಲ್ಲಿ ಅವುಗಳನ್ನು ಓದುವಂತೆ ಪ್ರೋತ್ಸಾಹಿಸುವುದೇ ನಾನು ಗ್ರಂಥಮಾಲೆಗಾಗಿ ಮಾಡುವ ಅಲ್ಪಸೇವೆಯೆಂದು ತಿಳಿದಿರುತ್ತೇನೆ.

## K. V. RAMA RAO ESQR. B.A., L.T.,

**SUB-ASSISTANT INSPECTOR OF SCHOOLS, C. & M. STATION, BANGALORE.**

I have perused the Subodha Kusumanjali Series of Canarese books......................They are written in a very simple and popular style and afford interesting reading to children in the Primary Standards. The subject matter selected for stories has got an elevating influence on the minds of the young. I consider them as ***suitable TEXT BOOKS for supplimentary reading*** by children in the lower standards of Kanarese Schools.

---

## K. Shankaranarayana Rao Esqr, M.A., B.L.,

**Government Advocate, Bangalore.**

........................These publications are sure to be a source of inspiration to all and particularly to the younger generation in these days when our youngsters have so few chances of receiving any training in religion or in our ancient lore. They are written in **clear, simple** yet **beautiful style**.

These books can be used with advantage not only for imparting **religious** and **moral instruction** to our boys and girls, but also for furnishing **healthy** and **noble ideals**, thereby helping the formation of **good character**.

They are also sure to be very valuable additions to our rather scanty Kannada Literature, and are sure to be very popular.

I believe **this kind of work**, for which Mr. Rama Rao appears to have quite a natural gift, is of **national importance** and deserves every encouragement and support at the hands of every patriotic citizen.

---

I agree with the above expression of opinion by Mr. Shankaranarayana Rao, I have seen several of the booklets published by Mr. Rama Rao and they are really instructive publications.

— (Sd) M. SHAMA RAO, M.A.,

*Mysore(Retired)*



ಸುಬೋಧ ಕುಸುಮಾಂಜಲಿ ಗ್ರಂಥ

೧೯೧೫ ರಲ್ಲಿ ಸ್ಥಾಪಿತವಾದು...

[ಸಚಿತ್ರ ಮಾಸ ಪುಸ್ತಕಾವ ?]

ವಾರ್ಷಿಕ ಚಂದಾ (ಅಂಚೇ ವೆಚ್ಚ ಸೇರಿ) } ಸ...ದಲ್ಲಿ ಪ...ಗಳಿಕ್ಕೆ

**ಗ್ರಂಥಮಾಲೆಯಲ್ಲಿ ಇದುವರೆಗೆ ಪ್ರಕಟವಾಗಿ...ವ ಪು**

| | |
|---|---|
| ಚಂದ್ರಹಾಸ | ೦-೨-೦ |
| ಧ್ರುವ | ೦-೨-೦ |
| ಪ್ರಹ್ಲಾದ | ೦-೨-೦ |
| ಸಾವಿತ್ರಿ | ೦-೨-೦ |
| ಹರಿಶ್ಚಂದ್ರ | ೦-೨-೦ |
| ಮಹಿಳಾ ಸುನೀತಿ ಶತಕ | ೦-೨-೦ |
| ಮಹಾತ್ಮಾಗಾಂಧಿ | ೦-೨-೦ |
| ಲೋಕಮಾನ್ಯ ತಿಲಕರು | ೦-೨-೦ |
| ದಾದಾಭಾಯಿನವರೋಜಿ | ೦-೨-೦ |
| ಅಹಲ್ಯಾಬಾಯಿಹೋಳ್ಕರ್ | ೦-೨-೦ |
| ಸಾವಿತ್ರಿಯ ಹಾಡು | ೦-೨-೦ |
| ಶ್ರೀರಾಮಾಯಣ ಕಥಾಸಂಗ್ರಹ | ೦-೧-೦ |
| ವಿನಾಯಕ | ೦-೧-೦ |
| ರಾಷ್ಟ್ರೀಯ ಗೀತಾವಳಿ | ೦-೦-೬ |
| ದಮಯಂತಿ | ೦-೨-೦ |
| ಭೀಷ್ಮ | ೦-೨-೦ |
| ಶ್ರೀರಾಮಕೃಷ್ಣಪರಮಹಂಸರು | ೦-೨-೦ |
| ರಾಣೀ ಭವಾನಿ | ೦-೨-೦ |
| ಶಕುಂತಲಾ ದುಷ್ಯಂತರು | ೦-೨-೦ |
| ಕರ್ಣ | ೦-೨-೦ |

ಕುಶಲವರು
ಚಂದ್ರಗುಪ್ತಚಕ್ರವರ್ತಿ
ಶ್ರೀ ಶಿವಾಜಿ
ಸ್ವಾಮಿವಿವೇಕಾನಂದ...
ಶ್ರೀ ಬುದ್ಧದೇವ
ಶ್ರೀ ಕೃಷ್ಣ
ಅಭಿಮನ್ಯು
ಅಶೋಕ ಚಕ್ರವ...
ದ್ರೌಪದಿ
ಸತೀ ಸಂಯುಕ್ತೆ
ಭಗೀರಥ
ಶ್ರೀ ತುಕಾರಾಮ್ ಸ...
ಅಕ್ಬರ್ ಮಹಾಶಯ...
ಈಶ್ವರಚಂದ್ರ ವಿದ್ಯಾ...
ಶ್ರೀ ದಾಕ್ತಾ ಯಣೀದ...
ದಯಾನಂದ ಸರಸ್ವ...
ಅಂಬರೀಷ
ಸಮರ್ಥ ರಾಮದಾ...
ವೀರ ಭೀಮಸೇನ
ಶ್ರೀ ವಿದ್ಯಾರಣ್ಯರು

...ಮಾರ್ಚಿ ತಿಂಗಳ ಸಂಚಿಕೆ “**ಸರ್. ಕೆ. ಶೇಷಾದ್ರಿಐಯ...**

*Address:—*

**THE MANAGER,**

***S. K. Granthamala Office,***

**No. 10, New Market, BANGALO...**

The Power Printing Works—B. City.

